ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ನಗರಾಭಿವೃದ್ಧಿ ಇಲಾಖೆ ಅಡಿ ಅನುಷ್ಠಾನಗೊಳಿಸುತ್ತಿರುವ ಕೇಂದ್ರ ಸರ್ಕಾರದ ಯೋಜನೆಗಳನ್ನು ಒಗ್ಗೂಡಿಸುವ ಬಗ್ಗೆ

ಶ್ರೀ ಕೆ.ಎ. ತಿಪ್ಪೇಸ್ವಾಮಿ(ನಾಮನಿರ್ದೇಶನ ಹೊಂದಿದವರು):-

1560 (1853) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಕೇಂದ್ರ ಸರ್ಕಾರದ ಯೋಜನೆಗಳಾದ UIDSMT (JNNURM), AMRUT, NKUSIP, Smart City Mission ಮುಂತಾದ ಹಲವು ಯೋಜನೆಗಳ ಅಡಿ ಪಟ್ಟಣ ಮತ್ತು ನಗರ ಪ್ರದೇಶಗಳಲ್ಲಿ ಕುಡಿಯುವ ನೀರಿನ ಹೊಸ ಯೋಜನೆಗಳು ಅನುಷ್ಠಾನಗೊಳಿಸಲಾಗುತ್ತಿವೆಯೇ; ಹಾಗಿದ್ದಲ್ಲಿ, ಸಂಪೂರ್ಣ ಮಾಹಿತಿ ನೀಡುವುದು ;

(ಆ) ಈ ಯೋಜನೆಗಳ ಅಡಿಯಲ್ಲಿ ಇದುವರೆಗೂ ಅನುಷ್ಠಾನಗೊಳಿಸಿರುವ ಕಾರ್ಯಕ್ರಮಗಳು ಯಾವುವು; ಬಿಡುಗಡೆಯಾದ ಅನುದಾನ ಮತ್ತು ಖರ್ಚು ಮಾಡಿದ ಅನುದಾನದ ಸಂಪೂರ್ಣ ಮಾಹಿತಿ ನೀಡುವುದು;

(ಇ) ಈ ಮೇಲ್ಕಂಡ ಯೋಜನೆಗಳಲ್ಲಿ ಆಯ್ಕೆ ಆಗಿರುವ ಕೆಲವು ಪಟ್ಟಣಗಳು ಮತ್ತು ನಗರಗಳು overlap ಆಗುತ್ತಿಲ್ಲವೇ; ಹಾಗಿದ್ದಲ್ಲಿ, ಈ ರೀತಿ overlap ಆಗಲು ಕಾರಣವೇನು; ಮತ್ತು ಯಾವ ಮಾನದಂಡದ ಮೇಲೆ ಈ ಪಟ್ಟಣಗಳು/ ನಗರಗಳನ್ನು ಆಯ್ಕೆ ಮಾಡಲಾಗಿದೆ ; (ಸಂಪೂರ್ಣ ಮಾಹಿತಿ ನೀಡುವುದು)

(ಈ) ಧ್ಯೇಯ, ಉದ್ದೇಶ ಮತ್ತು ಅಂತಿಮ ಫಲಿತಾಂಶ ಹೊಂದಿರುವ ಈ ಬಗೆಯ ಯೋಜನೆಗಳನ್ನು ಒಗ್ಗೂಡಿಸಿ ಫಲಪ್ರದವಾಗಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರ ಯತ್ನಿಸಿದೆಯೇ: ಈ ಬಗ್ಗೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ ? (ಸಂಪೂರ್ಣ ಮಾಹಿತಿ ನೀಡುವುದು)